



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 79

ಸಂಪುಟ: ೧೦ ಸಂಚಿಕೆ: ೦೨ | ಮೇ ೨೦೨೨ | ಪುಟಗಳು ೮ | ವಾರ್ಷಿಕ ಚಂದಾ ರೂ. ೨೦/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್

Vol. 10 Issue: 02 | **May** 2022 | Pages - 8 | Editor : Sri. B.R. Ravindranath


ಶ್ರೀ ಶಕ ೧೯೪೪ ಶುಭಕೃತ ನಾಮ ಸಂವತ್ಸರ ಉತ್ತರಾಯಣ ವಸಂತ – ಗ್ರೀಷ್ಮ ಋತು ಚಾಂದ್ರಮಾನ ವೈಶಾಖ – ಜ್ಯೇಷ್ಠ ಮಾಸ ಸೌರಮಾನ ಮೇಷ–ವೃಶಭ




ಬಿ.ಎಂ.ಶ್ರೀ. ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ :೨೬೬೧೫೮೭೭
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಬೆಳಗ್ಗೆ 10–30ರಿಂದ ಸಂಜೆ 5–30ಗಂಟೆ.
ವಾರದ ರಜಾದಿನ : ಮಂಗಳವಾರ


೦೯.೦೪.೨೦೨೨

## ದಿ|| ಪ್ರೊ. ಎಂ.ವಿ. ಸೀತಾರಾಮಯ್ಯನವರು ಸಂಗ್ರಹಿಸಿ ಸಂಪಾದಿಸಿರುವ ದಿ|| ತಿಮ್ಮಪ್ಪದಾಸರ ಪೂಜಾ ವಿಧಾನ ಕೀರ್ತನೆಗಳ 'ಅರ್ಚನ' ಕೃತಿ ಲೋಕಾರ್ಪಣೆ ದಿ|| ತಿಮ್ಮಪ್ಪದಾಸರ ಆಯ್ದ ಕೀರ್ತನೆಗಳ ಧ್ವನಿಮುದ್ರಿಕೆ ಲೋಕಾರ್ಪಣೆ



ಬಿ.ಎಂ.ಶ್ರೀ. ಪ್ರತಿಷ್ಠಾನ ಮತ್ತು ಸಮನ್ವಯ ಸಂಗೀತ ಕೇಂದ್ರ ಈ ಸಂಸ್ಥೆಗಳ ಸಹಯೋಗದಲ್ಲಿ ೯.೪.೨೦೨೨ರಂದು ಪ್ರೊ. ಎಂ.ವಿ.ಸೀತಾರಾಮಯ್ಯನವರು ಸಂಗ್ರಹಿಸಿ, ಸಂಪಾದಿಸಿರುವ ದಿವಂಗತ ತಿಮ್ಮಪ್ಪದಾಸರ ಪೂಜಾವಿಧಾನ ಕೀರ್ತನೆಗಳ 'ಅರ್ಚನ' ಕೃತಿ ಮತ್ತು ಆಯ್ದ ಕೀರ್ತನೆಗಳ ಧ್ವನಿಮುದ್ರಿಕೆ ಲೋಕಾರ್ಪಣೆ ಸಮಾರಂಭವನ್ನು ಎಂ.ವಿ.ಸೀ. ಸಭಾಂಗಣದಲ್ಲಿ ಆಯೋಜಿಸಲಾಗಿತ್ತು. 'ಅರ್ಚನ' ಲೋಕಾರ್ಪಣೆ ಮಾಡಿ ಮಾತನಾಡಿದ ಹಿರಿಯ ಸಾಹಿತಿಗಳು ಮತ್ತು ಕನ್ನಡಪರ ಹೋರಾಟಗಾರರಾದ ಡಾ.ಪಿ.ವಿ.ನಾರಾಯಣ "ಎಂ.ವಿ.ಸೀತಾರಾಮಯ್ಯನವರು ಸಂಗ್ರಹಿಸಿ ಸಂಪಾದಿಸಿರುವ 'ಅರ್ಚನ' ಕೃತಿಗೆ ಹರಿದಾಸ ಸಾಹಿತ್ಯ ಪರಂಪರೆಯಲ್ಲಿ ವಿಶೇಷ ಮಹತ್ವವಿದೆ. ತಿಮ್ಮಪ್ಪದಾಸರ ವಂಶದವರೇ ಆದ ಎಂ.ವಿ.ಸೀತಾರಾಮಯ್ಯನವರು ದೀರ್ಘಕಾಲ ಸಾಹಿತ್ಯಾಧ್ಯಾಪಕರಾಗಿದ್ದವರು. ಜೊತೆಗೆ ಸಂಗೀತಜ್ಞರೂ ಆಗಿದ್ದುದರಿಂದ ತಿಮ್ಮಪ್ಪದಾಸರು ಆತ್ಮಸಂತೋಷಕ್ಕಾಗಿ ಹಾಡಿಕೊಂಡ ನಿವೇದನಾ ರೂಪದ ಕೀರ್ತನೆಗಳ ಮಹತ್ವವನ್ನು ಗುರುತಿಸುವುದು ಸಾಧ್ಯವಾಯಿತು. ಎಂ.ವಿ.ಸೀ. ಅವರು ತಮಗೆ ದೊರೆತ ಎರಡು ತಾಳೆಗರಿ ಹಸ್ತಪ್ರತಿ, ಒಂದು ಕಾಗದದ ಹಸ್ತಪ್ರತಿಯ ನೆರವಿನಿಂದ ಕೀರ್ತನೆಗಳ ಪಾಠ, ಪಾಠಾಂತರಗಳ ಸಂಪಾದನೆ ಶೋಧನೆ ಪರಿಷ್ಕರಣ ಮಾಡಿ ೧೦೮ ಕೀರ್ತನೆಗಳ ಈ ಕೃತಿಯನ್ನು ಸಿದ್ಧಪಡಿಸಿದ್ದಾರೆ. ಈ ಕೀರ್ತನೆಗಳನ್ನು ಸಂಗೀತ ಕ್ಷೇತ್ರಕ್ಕೆ ಪರಿಚಯಿಸಿ, ಪ್ರಚಾರ ಮಾಡಬೇಕೆನ್ನುವ ಆಸೆ ಅವರ ಜೀವಿತಾವಧಿಯಲ್ಲಿ ಈಡೇರಲಿಲ್ಲ. ಆ ಕೆಲಸವನ್ನು ಎಂ.ಎಸ್. ರಾಮಪ್ರಸಾದ್ ತಂದೆಯ ಮೇಲಿನ ಪ್ರೀತಿ, ಭಕ್ತಿ, ಗೌರವ, ಅಭಿಮಾನದಿಂದ ಶ್ರಮವಹಿಸಿ ಸಮರ್ಥವಾಗಿ ಮಾಡಿದ್ದಾರೆ. ೨೫ ಕೀರ್ತನೆಗಳಿಗೆ ತಿರುಮಲೆ ಶ್ರೀನಿವಾಸ್ ಮತ್ತು ನಾಗರಾಜ ಹವಾಲ್ದಾರ್ ಅವರಿಂದ ರಾಗ ಸಂಯೋಜನೆ ಮಾಡಿಸಿ, ಸಂಗೀತ ಶಾಲೆಯ ವಿದ್ಯಾರ್ಥಿಗಳಿಗೆ ಗಾಯನ ತರಬೇತಿ ನೀಡಿ, ಹಾಡಿಸುವ ಮೂಲಕ ಸಮಾರಂಭದ ಸೊಗಸನ್ನು ಹೆಚ್ಚಿಸಿದ್ದಾರೆ. 'ಅರ್ಚನ' ಸಾಹಿತ್ಯಾಸಕ್ತರಿಗೂ ವಿದ್ವಾಂಸರಿಗೂ ಸಂಗೀತಪ್ರಿಯರಿಗೂ ಬೇಕಾಗುವ ವಿಶಿಷ್ಟ ಕೃತಿ" ಎಂದು ಹೇಳಿದರು.

ಅತಿಥಿಯಾಗಿದ್ದ ಎಂ.ಎಸ್. ರಾಮಪ್ರಸಾದ್, 'ಅರ್ಚನ' ಕೃತಿ ಲೋಕಾರ್ಪಣೆ ಮತ್ತು ಆಯ್ದ ಕೀರ್ತನೆಗಳ ಲೋಕಾರ್ಪಣೆ ಸಮಾರಂಭದ ಪರಿಕಲ್ಪನೆ, ಸಂಯೋಜನೆ, ಖರ್ಚುವೆಚ್ಚದ ನಿರ್ವಹಣೆ, ಸಂಗೀತ ವಿದ್ವಾಂಸರೊಂದಿಗೆ ಸಮಾಲೋಚನೆ ಮತ್ತು ಯೋಜನೆಯನ್ನು ಅನುಷ್ಠಾನಕ್ಕೆ ತರಲು ಪಟ್ಟ ಶ್ರಮವನ್ನು

## ಪ್ರೊ. ಟಿ. ವಿ. ವೆಂಕಟಾಚಲ ಶಾಸ್ತ್ರಿ ಅವರಿಗೆ ನಾಡೋಜ ಗೌರವ ಪದವಿ



ಹಂಪಿ ಕನ್ನಡ ವಿಶ್ವವಿದ್ಯಾಲಯವು ಪ್ರೊ. ಟಿ. ವಿ. ವೆಂಕಟಾಚಲ ಶಾಸ್ತ್ರಿ, ಗೊ.ರು. ಚನ್ನಬಸಪ್ಪ ಹಾಗೂ ಭಾಷ್ಯಂ ಸ್ವಾಮಿ ಅವರಿಗೆ ನಾಡೋಜ ಗೌರವ ಪದವಿಯನ್ನು ನೀಡುತ್ತಿರುವ ಸಂದರ್ಭದಲ್ಲಿ ಹೊಂಗನಸು ಶ್ರೀಯುತರುಗಳಿಗೆ ಅಭಿನಂದನೆಗಳನ್ನು ಸಲ್ಲಿಸುತ್ತದೆ.

ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರಿ ಅವರು ೦೯-೧೦-೨೦೦೧ರಿಂದ ೨೮-೦೩-೨೦೦೬ರ ವರೆಗೆ ಬಿಎಂಶ್ರೀ ಪ್ರತಿಷ್ಠಾನದ ಅಧ್ಯಕ್ಷರಾಗಿದ್ದರು. ಜೊತೆಗೆ ೨೮-೨-೨೦೦೬ ರಿಂದ ೨೨-೦೩-೨೦೧೨ರವೆಗೂ ಇವರು ಕಾರ್ಯಕಾರಿ ಸಮಿತಿ ಸದಸ್ಯರಾಗಿದ್ದರು.

ಪ್ರೊ. ಟಿ. ವಿ. ವೆಂಕಟಾಚಲ ಶಾಸ್ತ್ರಿ, ಕನ್ನಡ ಸಾಹಿತ್ಯ ಕ್ಷೇತ್ರದ ಹಿರಿಯ ಸಂಶೋಧಕರು, ವಿದ್ವಾಂಸರು, ವ್ಯಾಕರಣಕಾರರು. ಅವರು ಛಂದಸ್ಸು, ವ್ಯಾಕರಣ, ನಿಘಂಟು, ಕಾವ್ಯಮೀಮಾಂಸೆ, ಗ್ರಂಥಸಂಪಾದನೆ, ಸಾಹಿತ್ಯ ವಿಮರ್ಶೆ, ಸಾಹಿತ್ಯ ಚರಿತ್ರೆ , ಸಂಶೋಧನೆ , ಜೀವನಚರಿತ್ರೆ ಇತ್ಯಾದಿ ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಕುರಿತು ೧೨೦ಕ್ಕೂ ಹೆಚ್ಚು ಕೃತಿಗಳು, ಸಹಕರ್ತೃತ್ವ ಮತ್ತು ಸಹಸಂಪಾದನೆಯಲ್ಲಿ ೧೬ ಕೃತಿಗಳು, ಪ್ರಧಾನ ಸಂಪಾದಕತ್ವದಲ್ಲಿ ಸುಮಾರು ೩೦ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದ್ದಾರೆ. ಅವರ ಕನ್ನಡ ಸಾಹಿತ್ಯ ಸೇವೆಗಾಗಿ ಕನ್ನಡ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ , ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಗೌರವ ಡಿ.ಲಿಟ್., ಪಂಪ ಪ್ರಶಸ್ತಿ , ರನ್ನ ಪ್ರಶಸ್ತಿ , ನೃಪತುಂಗ ಸಾಹಿತ್ಯ ಪ್ರಶಸ್ತಿ ಮುಂತಾದ ಪ್ರಶಸ್ತಿಗಳನ್ನು ನೀಡಿ ಗೌರವಿಸಲಾಗಿದೆ.

## ದಿನಾಂಕ : ೨೮-೦೩-೨೦೨೨ರಂದು ಸನ್ಮಾನ್ಯ ಸಚಿವರಾದ ಹಾಲಪ್ಪ ಆಚಾರ್ಯರ ಭೇಟಿ



೨೮-೦೩-೨೦೨೨ರಂದು ಪ್ರತಿಷ್ಠಾನದ ನಿವೇಶನ ಗುತ್ತಿಗೆ ನವೀಕರಣಕ್ಕೆ ಸಂಬಂಧಿಸಿದಂತೆ, ಸನ್ಮಾನ್ಯ ಸಚಿವರಾದ ಶ್ರೀ ಹಾಲಪ್ಪ ಆಚಾರ್ಯ ಅವರಿಗೆ ಪತ್ರ ನೀಡಿ ಮನವಿ ಮಾಡಿಕೊಳ್ಳಲಾಯಿತು.

ಮಾಜಿ ಮಹಾಪೌರರು ಮತ್ತು ಪ್ರತಿಷ್ಠಾನದ ಅಭಿಮಾನಿಗಳಾದ ಶ್ರೀ ಬಿ.ಎಸ್. ಸತ್ಯನಾರಾಯಣ (ಕಟ್ಟೆ ಸತ್ಯ), ಉದಯಭಾನು ಕಲಾಸಂಘದ ಕಾರ್ಯದರ್ಶಿಗಳಾದ ಶ್ರೀ ಎಂ.ನರಸಿಂಹ ಹಾಗೂ ಪ್ರತಿಷ್ಠಾನದ ಗೌರವ ಕೋಶಾಧಿಕಾರಿಗಳಾದ ಡಾ.ಎಸ್.ಅನಿಲ್‌ಕುಮಾರ್ ಚಿತ್ರದಲ್ಲಿದ್ದಾರೆ.

ಸಭೆಯಲ್ಲಿ ಹಂಚಿಕೊಂಡು, ಸಹಕಾರ ನೀಡಿದ ಎಲ್ಲರಿಗೆ, ವಿಶೇಷವಾಗಿ ಬಿ.ಎಂ.ಶ್ರೀ. ಪ್ರತಿಷ್ಠಾನದ ಪದಾಧಿಕಾರಿಗಳು, ಕಾರ್ಯಕಾರಿ ಸಮಿತಿ ಸದಸ್ಯರು ಮತ್ತು ಸಿಬ್ಬಂದಿ ವರ್ಗದವರಿಗೆ ಕೃತಜ್ಞತೆ ಸಲ್ಲಿಸಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿ ಪ್ರಾಸ್ತಾವಿಕವಾಗಿ ಮಾತನಾಡಿದ ಡಾ.ಬೈರಮಂಗಲ ರಾಮೇಗೌಡ ಅವರು "೧೯೭೧ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದಿಂದ ಪ್ರಕಟವಾಗಿ, ಬಹುಬೇಗನೆ ಮಾರಾಟವಾಗಿ ಬಹುಕಾಲದಿಂದ ಸಂಗೀತಾಸಕ್ತರಿಗೂ ವಿದ್ವಾಂಸರಿಗೂ ಅಲಭ್ಯವಾಗಿದ್ದ 'ಅರ್ಚನ' ಕೃತಿಯನ್ನು ೫೨ ವರ್ಷಗಳ ನಂತರ ಮರುಮುದ್ರಣಗೊಳ್ಳುವಂತೆ ಮಾಡುವುದರ ಮೂಲಕ ಎಂ.ಎಸ್. ರಾಮಪ್ರಸಾದ್ ಅವರ ಭವ್ಯವಾದ ಕನಸೊಂದು ಈ ದಿನ ಸಾಕಾರಗೊಂಡಂತಾಗಿದೆ. ಭಗವಂತನಿಗೆ ಭಕ್ತ ಏಕಾಂತದಲ್ಲಿ ಸಲ್ಲಿಸುವ ಆಪ್ತ ನಿವೇದನೆಯಂತೆ ತಿಮ್ಮಪ್ಪದಾಸರ ಕೀರ್ತನೆಗಳಿವೆ. ಇವುಗಳಲ್ಲಿ ಸಂತೋಷ ಸಮಾಧಾನ ಸಂಭ್ರಮಗಳಿಗಿಂತ ಅಳಲು, ತಳಮಳ, ಕಳವಳ, ಸಂಕಟ, ಬೇಗುದಿಗಳು ಮೇಲುಗೈಯಾಗಿವೆ. ಲೋಕಾಂತದಿಂದ ಏಕಾಂತಕ್ಕೆ ಜಾರಿ ಬಹುಕಾಲದವರೆಗೆ ಅಲ್ಲಿಯೇ ವಿರಮಿಸಿದ ಅಪ್ಪಟ ಭಕ್ತನ ಮನಸ್ಸಿನಿಂದ ಹೊಮ್ಮಿದ ಭಾವತರಂಗಗಳಂತೆ ಈ ಕೀರ್ತನೆಗಳು ಕಂಡುಬರುತ್ತವೆ. ಕವಿಯ ಹೆಸರು, ಸ್ಥಳ, ಕಾಲ, ಕುಲಪರಂಪರೆ. ಗುರುಪರಂಪರೆ, ವಿದ್ಯಾವ್ಯಾಸಂಗ, ತಿಮ್ಮಪ್ಪದಾಸರ ಭಾಗವತ ದೃಷ್ಟಿ, ಕೃತಿಗಳು, ಕರ್ತೃತ್ವ ಇವುಗಳನ್ನು ಸಾಕ್ಷ್ಯಾಧಾರಗಳೊಂದಿಗೆ ಚರ್ಚಿಸಿರುವ ರೀತಿ ಎಂ.ವಿ.ಸೀ. ಅವರು ಎಂಥ ಘನ ವಿದ್ವಾಂಸರಾಗಿದ್ದರೆಂಬುದನ್ನು ಸ್ಪಷ್ಟಪಡಿಸುತ್ತದೆ. 'ಅರ್ಚನ' ಗ್ರಂಥಸಂಪಾದನಾ ಶಾಸ್ತ್ರದ ಅತ್ಯುತ್ತಮ ಮಾದರಿಗಳಲ್ಲಿ ಒಂದಾಗಿದೆ. ಡಿ.ವಿ.ಜಿ.ಅವರ ಮುನ್ನುಡಿ ಈ ಮೌಲಿಕ



ಕೃತಿಗೆ ಕಿರೀಟ ತೊಡಿಸಿದಂತಿದೆ" ಎಂದು ಹೇಳಿದರು.

ಕೀರ್ತನೆಗಳಿಗೆ ರಾಗ ಸಂಯೋಜನೆ ಮಾಡಿ, ವಿದ್ಯಾರ್ಥಿಗಳಿಗೆ ತರಬೇತಿ ನೀಡಿ, ಗಾಯನಕ್ಕೆ ತಯಾರು ಮಾಡಿದ ಸಂಗೀತ ವಿದ್ವಾಂಸರುಗಳಾದ ಶ್ರೀ ತಿರುಮಲೆ ಶ್ರೀನಿವಾಸ್ ಮತ್ತು ಶ್ರೀ ನಾಗರಾಜ ಹವಾಲ್ದಾರ್ ಮುಖ್ಯ ಅತಿಥಿಗಳಾಗಿ, ಎಂ.ಎಸ್. ಶೇಷಪ್ರಸಾದ್ ಶಿಬಿರಾರ್ಥಿಯಾಗಿ ತಮ್ಮ ಅನುಭವಗಳನ್ನು ಸ್ವಾರಸ್ಯಪೂರ್ಣವಾಗಿ ಹಂಚಿಕೊಂಡರು.

ಗೌರವ ಕಾರ್ಯದರ್ಶಿ ಡಾ. ಶಾಂತರಾಜು ಸ್ವಾಗತಿಸಿದರು. ಐಶ್ವರ್ಯ ಮತ್ತು ಸ್ವಾತಿ ಅವರ ಸುಶ್ರಾವ್ಯ ಪ್ರಾರ್ಥನೆಯೊಂದಿಗೆ ಪ್ರಾರಂಭವಾದ ಸಮಾರಂಭ ಬಿ.ಎಸ್. ಗುರುಪ್ರಸಾದ್ ಅವರ ವಂದನಾರ್ಪಣೆಯೊಂದಿಗೆ ಮುಕ್ತಾಯವಾಯಿತು. ಕೋಶಾಧಿಕಾರಿ ಡಾ. ಎಸ್. ಅನಿಲ್‌ಕುಮಾರ್ ಕ್ರಾರ್ಯಕ್ರಮ ನಿರೂಪಣೆ ಮಾಡಿದರು.

ನಂತರ ಎರಡು ಗಂಟೆಗಳ ಕಾಲ ಸಮನ್ವಯ ಸಂಗೀತ ಕೇಂದ್ರದ ವಿದ್ಯಾರ್ಥಿಗಳು ತಿಮ್ಮಪ್ಪದಾಸರ ಕೀರ್ತನೆಗಳನ್ನು ಅದ್ಭುತವಾಗಿ ಹಾಡಿ ಸಂಗೀತಪ್ರೇಮಿಗಳಿಗೆ ರಸದೌತಣ ನೀಡಿದರು.

# ಮೇ ೨೦೨೨ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

೧೩-೦೫-೨೦೨೨. ಶುಕ್ರವಾರ ಸಂಜೆ : ೦೫-೦೦ ಗಂಟೆಗೆ
ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ. ಪ್ರತಿಷ್ಠಾನ
ಶ್ರೀವೈಯಾಕರಣಿ ಗರಣಿ ಕೃಷ್ಣಾಚಾರ್ಯ ದತ್ತಿ ಉಪನ್ಯಾಸ ಕಾರ್ಯಕ್ರಮ
ವಿಷಯ : ಶಂಕರ ಮೊಕಾಶಿ ಪುಣೇಕರ
ಉಪನ್ಯಾಸಕರು : ಶ್ರೀ ಬಿ.ಎಸ್. ಗುರುಪ್ರಸಾದ್
ಹಸ್ತಪ್ರತಿ ಸಂಯೋಜನಾಧಿಕಾರಿ, ಬಿ.ಎಂ.ಶ್ರೀ. ಪ್ರತಿಷ್ಠಾನ

೨೦-೦೫-೨೦೨೨ ಶುಕ್ರವಾರ ಸಂಜೆ : ೫-೦೦ ಗಂಟೆಗೆ
ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ. ಪ್ರತಿಷ್ಠಾನ
ಶ್ರೀ ಕ.ವೆಂ. ರಾಘವಾಚಾರ್- ಶ್ರೀ ಡಿ.ವಿ.ಜಿ. ಗುಂಡಪ್ಪ- ಶ್ರೀ ಬಿ.ಎಸ್. ಸಣ್ಣಯ್ಯ- ಡಾ. ಎಂ.ಎಲ್. ಲಲಿತಮ್ಮ
ದತ್ತಿ ಉಪನ್ಯಾಸ ಕಾರ್ಯಕ್ರಮ
ವಿಷಯ : ' ಡಾ.ಎಂ.ಚಿದಾನಂದ ಮೂರ್ತಿ ಅವರ ಜೀವನ ಸಾಧನೆ'
ಉಪನ್ಯಾಸಕರು : ಡಾ. ಸಿ.ಯು. ಮಂಜುನಾಥ್
ಸಂಶೋಧಕರು, ಸಾಹಿತಿಗಳು ಮತ್ತು ನಿವೃತ್ತ ಪ್ರಾಂಶುಪಾಲರು

## ಬಿ.ಎಂ.ಶ್ರೀ. ಪ್ರತಿಷ್ಠಾನದ ನೂತನ ಗೌರವ ಕಾರ್ಯದರ್ಶಿಯಾಗಿ ಡಾ. ಶಾಂತರಾಜು



ಉಪ ಪ್ರಾಂಶುಪಾಲರು, ಸಹಪ್ರಾಧ್ಯಾಪಕರು ಹಾಗೂ ಕನ್ನಡ ವಿಭಾಗದ ಮುಖ್ಯಸ್ಥರು ವಿಜಯಾ ಸಂಜೆ ಕಾಲೇಜು ಬೆಂಗಳೂರು.
ರಂಗಭೂಮಿ, ಕಿರುತೆರೆ, ಬೆಳ್ಳಿತೆರೆ ಮತ್ತು ಆಕಾಶವಾಣಿಯಲ್ಲಿ ಕಲಾವಿದರಾಗಿರುವ ಇವರು ಮೂರು ಸಿನಿಮಾಗಳು, ಮೂರು ಧಾರಾವಾಹಿಗಳು ಹಾಗೂ ೨೫ಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸುವುದರ ಜೊತೆಗೆ ದೂರದರ್ಶನ ಹಾಗೂ ಆಕಾಶವಾಣಿಯಲ್ಲಿ ಅನೇಕ ಕಾರ್ಯಕ್ರಮಗಳನ್ನು ನಡೆಸಿಕೊಟ್ಟಿದ್ದಾರೆ.

ಸಂಪಾದಕರಾಗಿ ೩೨ ಕೃತಿಗಳನ್ನು ಹೊರತಂದಿರುವ ಶಾಂತರಾಜು ಅವರು ಉದಯಭಾನು ಕಲಾಸಂಘದ 'ಉದಯ ಸೌರಭ' ತ್ರೈಮಾಸಿಕ ಪತ್ರಿಕೆಯ ಸಂಪಾದಕರಾಗಿ ಹಲವು ಕೃತಿಗಳ ವಿಮರ್ಶೆಮಾಡಿ ಅತ್ಯುತ್ತಮ ವಿಮರ್ಶಕರು ಎಂಬ ಹೆಸರು ಪಡೆದಿದ್ದಾರೆ.

ಉದಯಭಾನು ಕಲಾ ಸಂಘದಲ್ಲಿ ಕನ್ನಡ ಭಾಷೆ ಮತ್ತು ಸಂಸ್ಕೃತಿ ಅಧ್ಯಯನಾಂಗದ ಸಂಚಾಲಕರು, ಜಯನಗರ ೯ನೇ ಬಡಾವಣೆಯ ಕನ್ನಡ ಅಭಿಮಾನಿಗಳ ಸಂಘದ ಕಾರ್ಯದರ್ಶಿ, ಗೋಧರೆ ಪ್ರತಿಷ್ಠಾನದ ಕಾರ್ಯದರ್ಶಿ, ಬೆಂಗಳೂರು ವಿಶ್ವವಿದ್ಯಾಲಯ ಕನ್ನಡ ಅಧ್ಯಾಪಕರ ಒಕ್ಕೂಟದ ಮಾಜಿ ಕಾರ್ಯದರ್ಶಿ ಹಾಗೂ ವಿಶ್ವವಿದ್ಯಾಲಯದ ಮಟ್ಟದಲ್ಲಿ ಹಲವು ಕಾರ್ಯಭಾರವನ್ನು ನಿರ್ವಹಿಸುತ್ತಿದ್ದಾರೆ.

ಕೆಂಪೇಗೌಡಪ್ರಶಸ್ತಿ (ಜಯನಗರ ವಿಧಾನ ಸಭಾ ಕ್ಷೇತ್ರದ ವತಿಯಿಂದ), ಕುವೆಂಪು ಸಾಹಿತ್ಯರತ್ನ, ಕನ್ನಡ ವೈಜಯಂತಿ ಪ್ರಶಸ್ತಿಗಳನ್ನು ಪಡೆದಿರುತ್ತಾರೆ.

## ಗೌರವ ಕಾರ್ಯದರ್ಶಿ ಜವಾಬ್ದಾರಿಯಿಂದ ಡಾ. ಬಿ.ಸಿ.ರಾಜಕುಮಾರ್ ನಿವೃತ್ತಿ



ದಿನಾಂಕ ೨೧ನೇ ಡಿಸೆಂಬರ್ ೨೦೨೦ ರಿಂದ ೩೧ನೇ ಮಾರ್ಚ್ ೨೦೨೨ ವರೆಗೆ ಡಾ. ಬಿ.ಸಿ. ರಾಜಕುಮಾರ್ ಅವರು ಬಿ.ಎಂ.ಶ್ರೀ. ಪ್ರತಿಷ್ಠಾನದ ಗೌರವ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿರುತ್ತಾರೆ.

ವಿಜಯ ಕಾಲೇಜಿನ ಹಿರಿಯ ಉಪನ್ಯಾಸಕರಾಗಿ ೧೯ ವರ್ಷಗಳ ಸೇವೆ ಸಲ್ಲಿಸಿದ್ದಾರೆ. ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್. ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುವುದರೊಂದಿಗೆ ಹಲವಾರು ಸಂಸ್ಥೆಗಳ ಜೊತೆ ನಿಕಟ ಸಂಬಂಧ ಹೊಂದಿದ್ದಾರೆ.

ಇಬ್ಬರು ಪಿಎಚ್.ಡಿ. ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುತ್ತಿದ್ದಾರೆ. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಪರೀಕ್ಷಾ ಚಟುವಟಿಕೆಗಳ ಮುಖ್ಯಸ್ಥರಾಗಿ ಸೇವೆ ಸಲ್ಲಿಸಿದ್ದಾರೆ.

ಪುಸ್ತಕಗಳು: ತಮೋಘ್ನ, ಚಿಂತನಧಾರೆ, ನಿರಂತರ, ಸಂಸ ದರ್ಪಣ ಮೊದಲಾದವು ಇವರ ಕೃತಿಗಳು. ಶಿಕ್ಷಣ, ಸಮಾಜ, ಸಾಹಿತ್ಯ ಸಂಬಂಧಿ ಹಲವು ಲೇಖನಗಳನ್ನು ಬರೆದಿದ್ದಾರೆ. ರಾಜ್ಯ, ರಾಷ್ಟ್ರೀಯ, ಅಂತರರಾಷ್ಟ್ರೀಯ ಸಮಾವೇಶಗಳಲ್ಲಿ ತಮ್ಮ ಪ್ರಬಂಧಗಳನ್ನು ಮಂಡಿಸಿದ್ದಾರೆ.

ಪ್ರಶಸ್ತಿಗಳು: ೧.ಕನ್ನಡ ಕಣ್ಮಣಿ ರಾಜ್ಯ ಪ್ರಶಸ್ತಿ ೨.ಸ್ವಾಮಿ ವಿವೇಕಾನಂದ ಸದ್ಭಾವನಾ ರಾಷ್ಟ್ರೀಯ ಪ್ರಶಸ್ತಿ ೩.ನೇತಾಜಿ ರಾಷ್ಟ್ರೀಯ ಪ್ರಶಸ್ತಿ ಭಾರತೀಯ ರೆಡ್ ಕ್ರಾಸ್‌ನ ಯುವ ರೆಡ್ ಕ್ರಾಸ್ ಕಾರ್ಯಕ್ರಮಾಧಿಕಾರಿಯಾಗಿ ಕಾರ್ಯನಿರ್ವಹಿಸಿದ್ದಾರೆ.

# ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ನಡೆದ ಕಾರ್ಯಕ್ರಮಗಳ ವರದಿ

೨೪-೩-೨೦೨೨

## ಡಾ. ಉಪ್ಪಂಗಳ ರಾಮಭಟ್ಟ ದತ್ತಿ ಕಾರ್ಯಕ್ರಮ

ವಿಷಯ : ದೇವುಡು ಅವರ ಅಂತರಂಗ

ಉಪನ್ಯಾಸಕರು : ಪ್ರೊ. ಎನ್. ಎಸ್. ಅಶ್ವತ್ಥನಾರಾಯಣ ಶಾಸ್ತ್ರೀ(ನೈಷಧಂ. ಎಸ್ಸೆ)

ಪ್ರಾಧ್ಯಾಪಕರು, ಸಾಹಿತಿಗಳು




'ದೇವುಡು ಅವರ ಅಂತರಂಗ' ಎಂಬ ವಿಷಯವನ್ನು ಕುರಿತು ಬಿಎಂಶ್ರೀ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರು ಮತ್ತು ನಿವೃತ್ತ ಪ್ರಾಧ್ಯಾಪಕ ಸಾಹಿತಿಗಳೂ ಆದ ಪ್ರೊ. ಎನ್. ಎಸ್. ಅಶ್ವತ್ಥನಾರಾಯಣ ಶಾಸ್ತ್ರೀ (ನೈಷಧಂ.ಎಸ್ಸೆ) ಅವರು ನಡೆಸಿಕೊಟ್ಟರು. ದೇವುಡು ಅವರು ಕನ್ನಡ ಕಾದಂಬರಿ ಪ್ರಕಾರಕ್ಕೆ ಗಮನಾರ್ಹ ಕೊಡುಗೆಯನ್ನು ನೀಡಿದ್ದಾರೆ ಎಂದು ನೈಷಧಂ ಹೇಳಿದರು. ದೇವುಡು ಅವರ ಮಹಾ ಬ್ರಾಹ್ಮಣ, ಮಹಾಕ್ಷತ್ರಿಯ ಮಹಾದರ್ಶನ ಕಾದಂಬರಿಗಳ ಮಹತ್ವವನ್ನು ತಿಳಿಸಿದರು. ದೇವುಡು ಅವರ ಅಂತರಂಗದ ವಿಚಾರಗಳೊಂದಿಗೆ ಅದೇ ಹೆಸರಿನ ಕಾದಂಬರಿಯನ್ನು ಕುರಿತು ೪೫ ನಿಮಿಷಗಳ ಉಪನ್ಯಾಸದಲ್ಲಿ ವಿವರಿಸಿದರು.

ಕಾರ್ಯಕ್ರಮದ ಪ್ರಾರಂಭದಲ್ಲಿ ಗೌರವ ಕಾರ್ಯದರ್ಶಿ ಡಾ.ಬಿ.ಸಿ.ರಾಜಕುಮಾರ್ ಅವರು ಉಪನ್ಯಾಸ ನೀಡಲು ಆಗಮಿಸಿದ್ದ ಪ್ರೊ.ಎನ್.ಎಸ್.ಅಶ್ವತ್ಥನಾರಾಯಣ ಶಾಸ್ತ್ರಿಯವರನ್ನು, ಅಧ್ಯಕ್ಷತೆ ವಹಿಸಿದ್ದ ಡಾ. ಬೈರಮಂಗಲ ರಾಮೇಗೌಡ, ಕಾರ್ಯಕ್ರಮಕ್ಕೆ ಆಗಮಿಸಿದ್ದ ಸಭಿಕರು ಮತ್ತು ಜಾಲತಾಣದ ಮೂಲಕ ಕಾರ್ಯಕ್ರಮಕ್ಕೆ ಹಾಜರಾದವರನ್ನು ಸ್ವಾಗತಿಸಿದರು.

ಡಾ.ಬೈರಮಂಗಲ ರಾಮೇಗೌಡರು ತಮ್ಮ ಆಶಯ ಭಾಷಣದಲ್ಲಿ ದೇವುಡು ಅವರನ್ನು ಸ್ಮರಿಸಿದರು. ಕಾರ್ಯಕ್ರಮದ ಕೊನೆಯಲ್ಲಿ ಡಾ.ಬಿ.ಸಿ.ರಾಜಕುಮಾರ್ ವಂದಿಸಿದರು.

೨೭-೦೩-೨೦೨೨

## ಶ್ರೀಮತಿ ಬಿ.ಜಿ. ಕುಸುಮಾ ಮತ್ತು ಕುಟುಂಬದವರು
## ಬಿ.ಎಸ್. ಗೋಪಾಲರಾವ್ ಮತ್ತು ಶ್ರೀಮತಿ ವೇದವತಿಬಾಯಿ ದತ್ತಿ

ವಿಷಯ : ಹನುಮದ್ವಿಲಾಸ ವಾಚನ

ಶ್ರೀಮತಿ ಶೋಭಾ ಶಶಿಧರ್ ಮತ್ತು ತಂಡ




ಶ್ರೀಮತಿ ಬಿ.ಜಿ.ಕುಸುಮಾ ಮತ್ತು ಕುಟುಂಬದವರು ಸಾಹಿತ್ಯ –ಸಂಗೀತ ಪ್ರಿಯರಾದ ಶ್ರೀ ಬಿ.ಎಸ್. ಗೋಪಾಲರಾವ್ ಮತ್ತು ಶ್ರೀಮತಿ ವೇದವತಿಬಾಯಿಯವರ ಹೆಸರಿನಲ್ಲಿ ಗಮಕ ವಾಚನ ಮತ್ತು ವ್ಯಾಖ್ಯಾನದ ಉದ್ದೇಶದಿಂದಲೇ ಸ್ಥಾಪಿಸಿರುವ ದತ್ತಿ ಕಾರ್ಯಕ್ರಮವನ್ನು ಬಿ.ಎಂ.ಶ್ರೀ. ಪ್ರತಿಷ್ಠಾನವು ಎಂ.ವಿ.ಸೀ. ಸಭಾಂಗಣದಲ್ಲಿ ಆಯೋಜನೆ ಮಾಡಿತ್ತು.

ದಿ.ಶ್ರೀಮತಿ ಬಿ.ಜಿ.ಕುಸುಮ ಅವರ ಕೊನೆಯ ಆಸೆಯಂತೆ ಅವರ ಶಿಷ್ಯೆಯಾದ ಶ್ರೀಮತಿ ಶೋಭಾ ಶಶಿಧರ್ ಮತ್ತು ತಂಡದವರಿಂದ 'ಹನುಮದ್ವಿಲಾಸ' ವಾಚನ ನಡೆಯಿತು.

ಹನುಮನ ವಿಲಾಸ ವೈಭವವನ್ನು ಮಧುರವಾದ ಕಂಠದಲ್ಲಿ ತಮ್ಮ ಎಂಟು ಜನ ಶಿಷ್ಯೆಯರೊಂದಿಗೆ ಶ್ರೀಮತಿ ಶೋಭಾ ಶಶಿಧರ್ ವಾಚನ ಮಾಡಿದರು. ರಾಮಕಥೆ, ಸೀತಾಮಾತೆಯ ವ್ಯಥೆ ಹಾಗೂ ಯುದ್ಧದಲ್ಲಿ ಲಂಕೆಯನ್ನು ಗೆಲ್ಲಲು ಶ್ರೀರಾಮನಿಗೆ ನೆರವಾದ ಹನುಮನ ಕಥೆಯನ್ನು ಸಭಿಕರು ತಲೆದೂಗುವಂತೆ ವಾಚಿಸಿದರು. ಶೋಭಾ ಶಶಿಧರ್ ಶ್ರೀ ವೀಣಾಪಾಣಿ ಸಂಗೀತಾಲಯ ಸ್ಥಾಪಿಸಿ, ಕಳೆದ ೨೫ ವರ್ಷಗಳಿಂದ ಶಾಸ್ತ್ರೀಯ ಸಂಗೀತ, ಗಮಕ, ದೇವರನಾಮ, ಭಾವಗೀತೆಗಳನ್ನು ಕಲಿಸುತ್ತಿದ್ದಾರೆ.

ಕಾರ್ಯಕ್ರಮದ ಪ್ರಾರಂಭದಲ್ಲಿ ಪ್ರತಿಷ್ಠಾನದ ಗೌರವಕಾರ್ಯದರ್ಶಿ ಡಾ.ಬಿ.ಸಿ.ರಾಜಕುಮಾರ್ ಅವರು ಶ್ರೀಮತಿ ಶೋಭಾ ಶಶಿಧರ್ ಮತ್ತು ತಂಡದವರನ್ನು ಹಾಗೂ ದತ್ತಿಯನ್ನು ಸ್ಥಾಪಿಸಿರುವ ಬಿ.ಜಿ.ಕುಸುಮ ಅವರ ಸೇವಾ ಮನೋಭಾವವನ್ನು ಶ್ಲಾಘಿಸಿದರು. ಅವರ ಸಹೋದರಿ ಶ್ರೀಮತಿ ಗೀತಾ ಗೋಪಿನಾಥ್ ಸಹೋದರಿಯರು, ಕುಟುಂಬದವರು ಮತ್ತು ಕಾರ್ಯಕ್ರಮಕ್ಕೆ ಆಗಮಿಸಿದವರನ್ನು ಸ್ವಾಗತಿಸಿದರು.

ಕಾರ್ಯಕ್ರಮದ ಕೊನೆಯಲ್ಲಿ ಶ್ರೀಮತಿ ಗೀತಾ ಗೋಪಿನಾಥ್ ಅವರು ಶ್ರೀಮತಿ ಶೋಭಾ ಶಶಿಧರ್ ತಂಡಕ್ಕೆ ನೆನಪಿನ ಕಾಣಿಕೆಯನ್ನು ನೀಡಿದರು. ಹಸ್ತಪ್ರತಿ ಸಂಯೋಜನಾಧಿಕಾರಿ ಶ್ರೀ ಬಿ.ಎಸ್. ಗುರುಪ್ರಸಾದ್ ಎಲ್ಲರಿಗೂ ವಂದಿಸಿದರು.

## ಗಣ್ಯ ಲೇಖಕಿ ಪ್ರಶಸ್ತಿ



೨೦೨೨ ನೇ ಸಾಲಿನ 'ಡಾ.ವಿಜಯಾ ಸುಬ್ಬರಾಜ್ ಗಣ್ಯ ಲೇಖಕಿ ಪ್ರಶಸ್ತಿ' ಗೆ ಧಾರವಾಡದ ಪ್ರೊ. ಶಾಂತಾ ಇಮ್ರಾಪುರ ಆಯ್ಕೆಯಾಗಿದ್ದಾರೆ. ಮೇ ತಿಂಗಳ ಮೊದಲ ವಾರದಲ್ಲಿ ನಡೆಯುವ ಸಮಾರಂಭದಲ್ಲಿ ಅವರಿಗೆ ಪ್ರಶಸ್ತಿ ಪ್ರದಾನ ಮಾಡಲಾಗುವುದು.

## 'ಸೂ.ವೆಂ.ಆರಗ ವಿಮರ್ಶಾ ಪ್ರಶಸ್ತಿ'



೨೦೨೨ ನೇ ಸಾಲಿನ 'ಸೂ.ವೆಂ. ಆರಗ ವಿಮರ್ಶಾ ಪ್ರಶಸ್ತಿ' ಗೆ ಶ್ರೀ ಕೆ. ಸತ್ಯನಾರಾಯಣ ಅವರ 'ಅವರವರ ಭವಕ್ಕೆ ಓದುಗರ ಭಕುತಿಗೆ' ಆಯ್ಕೆಯಾಗಿದೆ. ಪ್ರಶಸ್ತಿ ಪ್ರದಾನ ಸಮಾರಂಭ ಮೇ ತಿಂಗಳ ಮೊದಲ ವಾರದಲ್ಲಿ ನಡೆಯಲಿದೆ.



# ಎಂ.ವಿ.ಸೀ. ಬದುಕು ಬರಹ – ೨೬

ಹಿಂದಿನ ಸಂಚಿಕೆಯಿಂದ

ಹೀಗೆಯೇ ಕ್ಷಮಾಗುಣ. 'ಮೇದರ ಚೆನ್ನಿ' ಕತೆಯ ವಸ್ತು ಇದೇ. ಚೆನ್ನಿ ಮೇದರವಳು, ಹದಿಹರೆಯದ ಹೆಣ್ಣು, ಆದರೆ ಹೆಚ್ಚು ತೆರ ತೆರಲಾರದ ತಂದೆ ಅವಳನ್ನು ಮದುವೆ ಮಾಡಿ ಕೊಟ್ಟದ್ದು ತುಂಬ ಹಿರಿಯನಾದ ಮುನಿಯನಿಗೆ; ಅವಳಿಗೆ ಮಗನನ್ನು ಕೊಡುವ ಸಾಮರ್ಥ್ಯ ಅವನಿಗಿಲ್ಲ, ಆದರೆ ಅವನಿಗೆ ಮಗುವಿನ ಹಂಬಲ. ಹೀಗಾಗಿ ಚೆನ್ನಿ ತನ್ನನ್ನು ಇಷ್ಟಪಟ್ಟ ತರುಣ ಮಾದನೊಡನೆ ಸೇರಿ ಬಸಿರಾಗಿದ್ದಾಳೆ. ಮುದಿ ಗಂಡನಿಗೆ ಸಂಭ್ರಮ. ಯಾರಿಗಾದರೂ ತೊಟ್ಟಿಲನ್ನು ಕೊಟ್ಟು, ಅದರಲ್ಲಿ ಅವರ ಮಗು ಬೆಳೆದ ಮೇಲೆ ತೊಟ್ಟಿಲು ತೆಗೆದುಕೊಂಡು ಬಾ ಎಂದು ಚೆನ್ನಿಯನ್ನು ಅವನೇ ಕಳಿಸಿದ್ದಾನೆ. ಮಗುವಿನ ಬೆಳವಣಿಗೆಗೆ ಆಶ್ರಯವಿತ್ತ ತೊಟ್ಟಿಲಿನಿಂದ ತನ್ನ ಮಗುವಿಗೆ ಒಳ್ಳೆಯದಾಗುತ್ತದೆ ಎಂಬುದು ನಂಬಿಕೆ. ಹೀಗಾಗಿ ಚೆನ್ನಿ ತೊಟ್ಟಿಲು ಮಾರುತ್ತ ಬರುತ್ತಾಳೆ. ಅವಳು ಬಂದು ಕೂಗಿದ್ದು ಇನ್ನೇನು ಮಗುವಿನ ಬರವಿನ ಸಂಭ್ರಮವನ್ನು ಎದುರು ನೋಡುತ್ತಿರುವ ಕುಟುಂಬದ ಮುಂದೆ. ತೊಟ್ಟಿಲನ್ನು ತನ್ನ ಮಗುವಿಗಾಗಿ ಹಿಂದಕ್ಕೆ ಪಡೆಯುವ ಉದ್ದೇಶದಿಂದ ಚೆನ್ನಿ ಈ ಕುಟುಂಬದವರಿಗೆ ಅದನ್ನು ಪುಕ್ಕಟೆ ಕೊಡಲು ಬಯಸುತ್ತಾಳೆ. ಆದರೆ ಮನೆಯವರು ಅದಕ್ಕೊಪ್ಪುವುದಿಲ್ಲ. ಹೀಗಾಗಿ ತನಗೆ ವಾಪಸ್ಸು ಮಾಡಬೇಕೆಂಬ ಷರತ್ತಿನ ಮೇಲೆ ಒಂದು ರೂಪಾಯಿಗೆ ಅದನ್ನು ಕೊಡುತ್ತಾಳೆ. ಮುಂದೆ, ತನ್ನ ಬಸಿರಿನ ಕೂಸು ಬೆಳೆದಂತೆ ಚೆನ್ನಿಗೆ ತಾನು ಗಂಡನಿಗೆ ಮೋಸಮಾಡಿದೆ ಎಂಬ ಕೊರಗು ಕಾಡುತ್ತದೆ. ಮಗುವನ್ನೇನೋ ಹೆರುತ್ತಾಳೆ, ಆದರೆ ಕೊರಗಿನಿಂದಾಗಿ ಮಗುವನ್ನು ಗಂಡನ ಪಕ್ಕದಲ್ಲಿ ಮಲಗಿಸಿ ಒಂದು ರಾತ್ರಿ ಕಣ್ಮರೆಯಾಗುತ್ತಾಳೆ. ಮುನಿಯ (ಮುದಿ ಗಂಡ) ಆರು ತಿಂಗಳ ನಂತರ ತೊಟ್ಟಿಲು ಕೊಟ್ಟಿದ್ದ ಮನೆಗೆ ಮಗುವನ್ನು ಕೈಯಲ್ಲಿ ಎತ್ತಿಕೊಂಡು ಬರುತ್ತಾನೆ. ಇದ್ದಕ್ಕಿದ್ದಂತೆ ಅವಳು ಕಣ್ಮರೆಯಾದುದನ್ನು ತಿಳಿಸಿ "ಸತ್ತಳೋ ಕೆಟ್ಟಳೋ ಆ ಶಿವನೇ ಬಲ್ಲ" ಎನ್ನುತ್ತಾನೆ; ಅವಳಿಗಾಗಿ ಇಡೀ ಊರು ತಿರುಗಿದ್ದನ್ನು ತಿಳಿಸುತ್ತಾನೆ. ದೇವರು ಕೊಟ್ಟ ಈ ಮಗುವನ್ನು ತಾನೇ ಮಾಡಿದ ತೊಟ್ಟಿಲಲ್ಲಿ ದೇವನೇ ಕಾಪಾಡಬೇಕು ಎಂದು ತೊಟ್ಟಿಲನ್ನು ತೆಗೆದು–ಕೊಂಡು ಹೋಗುತ್ತಾನೆ. ಅವಳು ತನ್ನ ಪ್ರಿಯಕರನ ಜೊತೆ ಓಡಿಹೋಗಿರಬಹುದೇ ಎಂಬುದು ನಿರೂಪಕನ ಅನುಮಾನ. ಆದರೆ ಅವನ ಹೆಂಡತಿಯದು ಬೇರೆಯದೇ ತೆರನ ಆಲೋಚನೆ: ತಾಯ್ತನದ ಪುಣ್ಯವನ್ನು ಬಿಟ್ಟು ಗಂಡನಿಗೆ ಮೋಸ ಮಾಡಿದೆನೆಂಬ ಯಾತನೆ ಹೊತ್ತು ಕೆರೆಯನ್ನೋ ಬಾವಿಯನ್ನೋ ಸೇರಿದ್ದಾಳೆ ಎಂಬುದು ಅವಳ ಊಹೆ. ಅವಳ ಕಣ್ಮರೆ ಹೀಗೆ ನಾನಾ ವಿಧವಾದ ಊಹೆಗಳಿಗೆ ಕಾರಣವಾಗುವುದು ವಸ್ತುವನ್ನು ಕಾಣಬೇಕಾದ ರೀತಿಯನ್ನೂ ಸೂಚಿಸುತ್ತದೆ. ಒಂದೆಡೆ ಮುನಿಯ–ಚೆನ್ನಿಯರ ವೈಯಕ್ತಿಕ ಸಮಸ್ಯೆಗಳು; ಮತ್ತೊಂದೆಡೆ ಬಡತನ–ತೆರಗಳ ಸಮಸ್ಯೆ. ತನ್ನದಲ್ಲದ ಮಗುವಿನ ಬಗೆಗಿನ ಮುನಿಯನ ಮೋಹ ಮಾಸ್ತಿಯವರ 'ಕೃಷ್ಣಮೂರ್ತಿಯ ಹೆಂಡತಿ' ಕತೆಯನ್ನು ನೆನಪಿಸುತ್ತದೆ.

ಇಂತಹುದೇ ಔದಾರ್ಯದ ಕತೆ 'ಕುಮುದೆ'. ಸುಂದರ ತನ್ನ ಹೆಂಡತಿ ಶಾರದೆ ಹೆರಿಗೆಗಾಗಿ ಆಸ್ಪತ್ರೆಗೆ ಸೇರಿದಾಗ, ಅಲ್ಲಿಯೇ ತಾನು ಹಿಂದೆ ಪ್ರೀತಿಸಿದ್ದ ಯುವತಿ ಕುಮುದೆಯೂ ಮಗುವೊಂದಕ್ಕೆ ಜನ್ಮವಿತ್ತಿರುವುದು ತಿಳಿಯುತ್ತದೆ. ಅವಳ ಯೋಗಕ್ಷೇಮ ವಿಚಾರಿಸಲೆಂದು ಅವಳಿದ್ದ ವಾರ್ಡ್‌ಗೆ ಹೋದಾಗಲೆಲ್ಲ ಪಕ್ಕದಲ್ಲೇ ಅವಳ ಗಂಡನೂ ಇರುವುದರಿಂದ ಹಾಗೆ ಮಾಡಲಾರದೆ ವಾಪಸ್ಸು ಬರುತ್ತಿರುತ್ತಾನೆ. ತನಗೆ ಹೆಣ್ಣು ಮಗುವೊಂದು ಹುಟ್ಟುತ್ತದೆ; ಆ ಸಂಭ್ರಮದಲ್ಲಿ ಹೆಂಡತಿಯನ್ನು ನೋಡಲು ಆಸ್ಪತ್ರೆಗೆ ಭೇಟಿ ಕೊಡುವ ಸುಂದರನಿಗೆ, ಕೆಲವು ದಿನಗಳಾದ ಮೇಲೆ, ಕುಮುದೆಯನ್ನೂ ಮಾತಾಡಿಸಬೇಕೆಂಬ ಹಂಬಲ ಹೆಚ್ಚಾಗುತ್ತದೆ. ಅವಳಿದ್ದ ವಾರ್ಡಿಗೆ ಹೋದರೆ ಕುಮುದೆ ಮಲಗಿರುತ್ತಿದ್ದ ಹಾಸಿಗೆಯಲ್ಲಿ ಮತ್ತಾವುದೋ ಹೆಂಗಸು ಮಲಗಿರುತ್ತಾಳೆ. ವಿಚಾರ ತಿಳಿಯದೆ ವಾರ್ಡಿನಿಂದ ಹೊರಬರುವಾಗ ಅಳುತ್ತಿದ್ದ ಎಳೆಯ ಕಂದಮ್ಮನನ್ನು ನರ್ಸ್ ಸಮಾಧಾನ ಮಾಡುತ್ತ ಬಾಟಲಿ ಹಾಲು ಕುಡಿಸುತ್ತಿರುತ್ತಾಳೆ. ಕುಮುದೆಯ ಗಂಡ ರಾಮಚಂದ್ರಯ್ಯ ಎದುರಾಗುತ್ತಾನೆ. ವಿಚಾರ ತಿಳಿಯುತ್ತದೆ: ಕುಮುದೆ ಜ್ವರದಿಂದ ನರಳಿ ಸತ್ತಿರುತ್ತಾಳೆ; ನೆರವಿಗೆ ಬೇರಾರೂ ಇಲ್ಲದ ಅಸಹಾಯಕ ಗಂಡ ಮಗುವನ್ನು ಒಂದು ವರ್ಷವಾದರೂ ನೋಡಿಕೊಳ್ಳಿರೆಂದು ಆಸ್ಪತ್ರೆಯವರನ್ನು ಕೇಳಿಕೊಂಡರೂ ಪ್ರಯೋಜನವಾಗಿರಲಿಲ್ಲ. ಅವನು ತಾನಾಗಿಯೇ ಸುಂದರನನ್ನು ಮಾತಾಡಿಸಿಕೊಂಡು ಬಂದು, ಅವನು ಸುಂದರನೆಂಬುದನ್ನು ಖಚಿತಪಡಿಸಿಕೊಂಡು, ಸಾಯುವ ಕೆಲಕ್ಷಣಗಳ ಮುಂಚೆ ಕುಮುದೆ ತಾನು ಸುಂದರನನ್ನು ಪ್ರೀತಿಸಿದ್ದ ವಿಷಯ ತಿಳಿಸಿ ಕ್ಷಮೆ ಕೇಳಿದ್ದಳೆಂದೂ, ಮಗುವನ್ನು ಸುಂದರ ಎಂದು ಕರೆಯುವುದು ತನ್ನ ಆಸೆಯೆಂದೂ ಹೇಳಿಕೊಂಡುದನ್ನು ತಿಳಿಸುತ್ತಾನೆ. ರಾಮಚಂದ್ರಯ್ಯ ಮಗುವನ್ನು ನೋಡಿಕೊಳ್ಳುವ ಸ್ಥಿತಿಯಲ್ಲಿಲ್ಲದ್ದರಿಂದ ತಾನೇ ಬೆಳೆಸುವುದಾಗಿ ಸುಂದರ ಆಶ್ವಾಸನೆಯಿತ್ತು ಆ ಮಗುವನ್ನೂ ತನ್ನ ಮನೆಗೆ ಕರೆತರುತ್ತಾನೆ. ಹೆಂಡತಿ ಮೊದಮೊದಲು ಸಿಟ್ಟಾದರೂ ಕೊನೆಗೆ ಅವಳಿಜವಳಿ ಮಕ್ಕಳಂತೆ ಇಬ್ಬರನ್ನೂ ಬೆಳೆಸಲು ಒಪ್ಪುತ್ತಾಳೆ. ಮಗು ಯಾವ ಜಾತಿಯದೋ ಎಂದು ಅತ್ತೆ ಪ್ರಶ್ನಿಸಿದಾಗ ಸುಂದರ "ಯಾವ ಜಾತಿಯಾದರೇನಮ್ಮಾ, ಸಣ್ಣ ಮಗು; ಜಾತಿಯ ಅಂಗಿ ತೊಟ್ಟುಕೊಳ್ಳುವುದು ಬೆಳೆದ ಮೇಲೆ" ಎಂದು ನುಡಿಯುತ್ತಾನೆ. – ಮುಂದುವರೆಯುವುದು

ಕಿರುಪರಿಚಯ

## ಡಾ.ರಾಜೇಶ, ಕಾವ್ಯನಾಮ : ಜೆ. ಅಮೃತಿ ರಾಜೇಶ್

ತಂದೆ– ಜವರಯ್ಯ, ತಾಯಿ– ಪುಟ್ಟಮ್ಮ

ಹುಟ್ಟಿದ ದಿನ: ೨೦–೦೩–೧೯೭೦

ಸ್ಥಳ : ಅಮೃತಿ, ಪಾಂಡವಪುರ ತಾಲ್ಲೂಕು,

ವಿದ್ಯಾಭ್ಯಾಸ : ಎಂ.ಎ ಕನ್ನಡ ( ಮೈಸೂರು ವಿ.ವಿ) ೧೯೯೩, ಜಾನಪದ ಡಿಪ್ಲೊಮಾ, ಭಾಷಾವಿಜ್ಞಾನ ಡಿಪ್ಲೊಮಾ, ಸಂಶೋಧನೆ : ಪಾಂಡವಪುರ ತಾಲ್ಲೂಕಿನ ಸಾಂಸ್ಕೃತಿಕ ಅಧ್ಯಯನ ( ೨೦೧೫) ಮೈ. ವಿ.ವಿ. ಮಾರ್ಗದರ್ಶಕರು: ಡಾ.ಪುಟ್ಟಸ್ವಾಮಿ, ಸ್ನಾತಕೋತ್ತರ ಕೇಂದ್ರ, ಹಾಸನ. ಅಧ್ಯಾಪಕ: ಹೆಚ್.ಕೆ. ವೀರಣ್ಣಗೌಡ ಕಾಲೇಜು, ಮದ್ದೂರು. ಪ್ರಾಂಶುಪಾಲರು, ವಿ.ಎಸ್.ಎಸ್ ಪದವಿ ಕಾಲೇಜು ಸಾಧನಾಪುರ ಹುಣಸೂರು. ಅಧ್ಯಾಪಕ: ಬಾಲಕಿಯರ ಪದವಿ ಪೂರ್ವ ಕಾಲೇಜು, ಹುಣಸೂರು. ಸಹ ಪ್ರಾಧ್ಯಾಪಕ: ವಿವಿ.ಪುರ ಸಂಜೆ ಕಾಲೇಜು, ಬೆಂಗಳೂರು.–೪,

'ನೀ ಬರುವೆಯೆಂದು' ಕವನ ಸಂಕಲನ 'ಬಣ್ಣದ ಚಿಟ್ಟೆಗಳ ನಡುವೆ'– ಕಾದಂಬರಿ 'ಅಲ್ಲೋಲ'– ಕಥಾ ಸಂಕಲನ ಅಮೃತಿ ಗ್ರಾಮದ ಜಾನಪದೀಯ ಅಧ್ಯಯನ ಸಂಶೋಧನೆ ವಿಮರ್ಶೆಗೆ ನೂರು ಕಣ್ಣು–ಸಂಪಾದನೆ. ತಿರುಕುಲೋತ್ತಾರರು– ಸಂಶೋಧನೆ ಮೇಲ್ಕೋಟೆ ಸರ್ಕಲ್ ಕಾದಂಬರಿ ಅಚ್ಚಿನಲ್ಲಿ. ರಾಷ್ಟ್ರೀಯ ಅಂತಾರಾಷ್ಟ್ರೀಯ ವಿಚಾರಗೋಷ್ಠಿಗಳಲ್ಲಿ ೩೦ ಕ್ಕೂ ಹೆಚ್ಚು ಸಂಶೋಧನಾ ಪ್ರಬಂಧಗಳ ಮಂಡನೆ.

## ಡಾ ಸಿ. ಯು. ಮಂಜುನಾಥ್



ಮೂಲತಃ ಚಿಕ್ಕಜಾಜೂರಿನವರಾದ ಸಿ. ಯು. ಮಂಜುನಾಥ್ ಓದುವ ದಿನದಿಂದಲೂ ಪ್ರತಿಭಾವಂತ ವಿದ್ಯಾರ್ಥಿಯೆನಿಸಿ ಎಂ. ಎ. ಪದವಿಯನ್ನು ಪ್ರಥಮ ರ್‍ಯಾಂಕ್‌ನೊಂದಿಗೆ ಪಡೆದವರು. ಜಗದ್ಗುರು ರೇಣುಕಾಚಾರ್ಯ ಕಾಲೇಜಿನಲ್ಲಿ ೧೯೭೨ ರಿಂದ ಅಧ್ಯಾಪಕರಾಗಿ, ಉಪಪ್ರಾಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ ಮತ್ತು ಪ್ರಿನ್ಸಿಪಾಲರಾಗಿ ಸೇವೆಸಲ್ಲಿಸಿ ೨೦೦೭ರಲ್ಲಿ ನಿವೃತ್ತರಾದವರು. ಡಾ. ಚಿದಾನಂದಮೂರ್ತಿಗಳ ಮಾರ್ಗದರ್ಶನದಲ್ಲಿ 'ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ' ಎಂಬ ವಿಷಯದ ಬಗ್ಗೆ ಸಂಶೋಧನೆ ನಡೆಸಿ ಪಿಎಚ್.ಡಿ. ಪದವಿ ಪಡೆದಿದ್ದಾರೆ. ಅದು ಪ್ರಕಟವಾಗಿದೆ. 'ಘಟ್ಟಿವಾಳಯ್ಯನ ವಚನಗಳು', 'ಅಂಬಿಗರ ಚೌಡಯ್ಯನ ವಚನಗಳು', 'ಚನ್ನಬಸವಣ್ಣನವರ ವಚನಗಳು', 'ಬಸವೋತ್ತರ ಯುಗದ ವಚನಗಳು', 'ಹೇಮದೀಪ್ತಿ', 'ಸ್ವರ್ಣ–ರೇಣುಕ' ಮೊದಲಾದ ಗ್ರಂಥಗಳನ್ನು ಸ್ವತಂತ್ರವಾಗಿ ಸಂಪಾದಿಸಿರುವುದಲ್ಲದೆ ಇತರರೊಂದಿಗೆ ಸೇರಿಕೊಂಡು ಹಲವಾರು ಗ್ರಂಥಗಳನ್ನು ಸಂಪಾದಿಸಿದ್ದಾರೆ, ವಿದ್ವತ್ ಪತ್ರಿಕೆಗಳಲ್ಲಿ ನೂರಕ್ಕೂ ಹೆಚ್ಚು ಸಂಪ್ರಬಂಧಗಳು, ಲೇಖನಗಳನ್ನು ಪ್ರಕಟಿಸಿರುವ ಮಂಜುನಾಥ್, ಹೈದರಾಬಾದಿನ ಎನ್ರಾನ್ ಸಂಸ್ಥೆಯಿಂದ ಬೋಧನೆ ಮತ್ತು ಸಂಶೋಧನೆಗಾಗಿ ಚಿನ್ನದ ಪದಕದೊಂದಿಗೆ ಫೆಲೋ ಆಗಿ ಮಾನ್ಯತೆ ಪಡೆದಿದ್ದಾರೆ. ಲೋಚನ ದೀಪ್ತಿಯ ಸಂಪಾದನೆ ಮತ್ತು ಪ್ರಕಟಣೆಯಲ್ಲಿ ತುಂಬ ಶ್ರದ್ಧೆ ಆಸಕ್ತಿಗಳಿಂದ ಪಾಲ್ಗೊಂಡಿರುವುದನ್ನು ನೆನೆಯುತ್ತ ಅವರನ್ನು ಪ್ರತಿಷ್ಠಾನದ ಪರವಾಗಿ ಮತ್ತು ಎಲ್ಲರ ಪರವಾಗಿ ಅಭಿನಂದಿಸಲು ಸಂತೋಷವೆನಿಸುತ್ತದೆ.

## ಶ್ರೀ ಬಿ.ಎಸ್. ಗುರುಪ್ರಸಾದ್



ವಿದ್ಯಾಭ್ಯಾಸ : ಬಿ.ಎಸ್ಸಿ, ಬಿ.ಕಾಂ., ಶಾಸನಶಾಸ್ತ್ರದಲ್ಲಿ ಡಿಪ್ಲೊಮಾ

ಭಾರತೀಯ ಜೀವ ವಿಮಾ ನಿಗಮದಲ್ಲಿ ಆಡಳಿತಾಧಿಕಾರಿಯಾಗಿ ನಿವೃತ್ತಿ ಹೊಂದಿದ್ದು ಪ್ರಸ್ತುತ ಜೀವ ವಿಮಾ ನಿಗಮದಲ್ಲಿ ಪ್ರತಿನಿಧಿಯಾಗಿರುತ್ತಾರೆ. ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ೯ ವರ್ಷಗಳಿಂದ ಹಸ್ತಪ್ರತಿ ಸಂರಕ್ಷಣಾ ಕಾರ್ಯದಲ್ಲಿ ತೊಡಗಿಸಿಕೊಂಡಿರುತ್ತಾರೆ. ಕರ್ನಾಟಕ ಇತಿಹಾಸ ಅಕಾಡೆಮಿಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗಿಯಾಗಿರುತ್ತಾರೆ. ಜೊತೆಗೆ ಚಾರಣ, ಪಕ್ಷಿವೀಕ್ಷಣೆ, ಛಾಯಾಗ್ರಹಣ ಚಟುವಟಿಕೆಗಳಲ್ಲದೆ ಹಲವಾರು ಸಂಘಸಂಸ್ಥೆಗಳ ಜೊತೆ ಒಡನಾಟ ಹೊಂದಿರುತ್ತಾರೆ.

೧೬-೦೪-೨೦೨೨

## ಸಿ.ಕೆ.ನಾಗರಾಜರಾವ್, ಕೆ.ಪಿ.ರಾವ್, ಕೊರಟಿ ಶ್ರೀನಿವಾಸರಾವ್ ಸಂಯುಕ್ತ ದತ್ತಿ ಕಾರ್ಯಕ್ರಮ

### ಉಪನ್ಯಾಸಕರು : ಡಾ.ಜೆ. ರಾಜೇಶ್

### ವಿಷಯ : ಕೊರಟಿ ಶ್ರೀನಿವಾಸರಾವ್ ಅವರ ಐತಿಹಾಸಿಕ ಸಣ್ಣಕಥೆಗಳು




೧೬-೪-೨೦೨೨ ರಂದು ಸಿ.ಕೆ.ನಾಗರಾಜರಾವ್, ಕೆ.ಪಿ.ರಾವ್, ಕೊರಟಿ ಶ್ರೀನಿವಾಸರಾವ್ ಸಂಯುಕ್ತ ದತ್ತಿ ಕಾರ್ಯಕ್ರಮವನ್ನು ನಡೆಸಲಾಯಿತು. ವಿ.ವಿ.ಪುರ ಸಂಜೆ ಕಾಲೇಜಿನ ಪ್ರಾಧ್ಯಾಪಕರೂ, ಸಾಹಿತಿಗಳೂ, ಸಂಶೋಧಕರೂ ಆದ ಡಾ. ಅಮೃತಿ ರಾಜೇಶ್ ಜೆ. ಅವರು 'ಕೊರಟಿ ಶ್ರೀನಿವಾಸರಾವ್ ಅವರ ಐತಿಹಾಸಿಕ ಸಣ್ಣಕತೆಗಳು' ಎಂಬ ವಿಷಯ ಕುರಿತು ಉಪನ್ಯಾಸ ನೀಡಿದರು. ಕೊರಟಿ ಶ್ರೀನಿವಾಸರಾವ್ ಅವರ ವಿದ್ಯಾಭ್ಯಾಸ, ವೃತ್ತಿ ಮತ್ತು ವ್ಯಕ್ತಿತ್ವವನ್ನು ಪರಿಚಯಿಸಿ, ಅವರ ಸಾಮಾಜಿಕ ಕಾದಂಬರಿಗಳು, ಐತಿಹಾಸಿಕ ಕಾದಂಬರಿಗಳು, ಧಾರ್ಮಿಕ ಕೃತಿಗಳನ್ನು ಉಲ್ಲೇಖಿಸಿ ಪ್ರಧಾನವಾಗಿ ಅವರ ೧೪೬ ಐತಿಹಾಸಿಕ ಕತೆಗಳ ಹಿನ್ನೆಲೆಯನ್ನು ಕುರಿತು ವಿವರವಾಗಿ ಮಾತನಾಡಿದರು.

ರಾಜ ಮಹಾರಾಜರ ಕಾಲದಲ್ಲಿನ ತ್ಯಾಗ, ಬಲಿದಾನ, ಸಾಮಾಜಿಕ ವಾತಾವರಣ, ಸಾಂಸ್ಕೃತಿಕ ವ್ಯವಸ್ಥೆ ಅವರ ಕತೆಗಳ ಮೇಲೆ ಬೀರಿರುವ ಪ್ರಭಾವವೆಂತಹದ್ದು, ಅದನ್ನು ಕತೆಯಾಗಿಸುವಲ್ಲಿ ಶ್ರೀನಿವಾಸರಾವ್ ಅವರ ಕೌಶಲ್ಯ, ನೈಪುಣ್ಯತೆ ಎಂಥದ್ದು ಎಂಬುದನ್ನು ವಿವರಿಸಿ ಕತೆಗಳ ಮಹತ್ವವನ್ನು ಅರ್ಥಪೂರ್ಣವಾಗಿ ಕಟ್ಟಿಕೊಟ್ಟರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಡಾ. ಬೈರಮಂಗಲ ರಾಮೇಗೌಡ ಅವರು ಪ್ರಾಸ್ತಾವಿಕವಾಗಿ ಮಾತನಾಡಿ ಕೊರಟಿ ಶ್ರೀನಿವಾಸರಾವ್ ಸಮಗ್ರ ಸಾಹಿತ್ಯದ ಕಿರು ಪರಿಚಯ ಮಾಡಿಕೊಟ್ಟರು. ಕಾರ್ಯಕ್ರಮವು ಡಾ. ಶಾಂತರಾಜು ಅವರ ಸ್ವಾಗತ ಮತ್ತು ವಂದನಾರ್ಪಣೆಯನ್ನು ಮಾಡಿದರು.

೧೮-೦೪-೨೦೨೨

## ಹಳಗನ್ನಡ ತರಗತಿ ಕಾರ್ಯಕ್ರಮದ ಉದ್ಘಾಟನಾ ಕಾರ್ಯಕ್ರಮ



ಬಿ.ಎಂ.ಶ್ರೀ. ಪ್ರತಿಷ್ಠಾನದ ರಾಮಸ್ವಾಮಿ ಸಭಾಂಗಣದಲ್ಲಿ ೨೦೨೨ನೇ ಸಾಲಿನ ಹಳಗನ್ನಡ ತರಗತಿಗಳ ಉದ್ಘಾಟನಾ ಸಮಾರಂಭವನ್ನು ಹಮ್ಮಿಕೊಳ್ಳಲಾಗಿತ್ತು. ಕಾರ್ಯಕ್ರಮವನ್ನು ನಾಡಿನ ಪ್ರಸಿದ್ಧ ಚಿಂತಕರೂ ಸಾಹಿತಿಗಳೂ ಹೋರಾಟಗಾರರೂ ಆದ ಡಾ.ಪಿ.ವಿ.ನಾರಾಯಣ ಅವರು ಉದ್ಘಾಟಿಸಿ ಪ್ರಾಚೀನ ಕಾವ್ಯ ಪರಂಪರೆಯನ್ನು ಕುರಿತು, ಹಳಗನ್ನಡದ ಪ್ರಸ್ತುತತೆಯನ್ನು ಕುರಿತು ವಿವರಿಸಿದರು. ಜೈನ ರಾಮಾಯಣದ ವೈಶಿಷ್ಟ್ಯವನ್ನೂ ಮಹತ್ವವನ್ನೂ ತಿಳಿಸಿದರು. ಇದೇ ವೇದಿಕೆಯಲ್ಲಿ ಡಾ.ಆರ್.ಲಕ್ಷ್ಮೀನಾರಾಯಣ, ಪ್ರೊ. ಕೆ.ಆರ್. ಗಣೇಶ್, ಪ್ರೊ.ಚಂದ್ರಶೇಖರ್ ಅವರು ಉಪಸ್ಥಿತರಿದ್ದು 'ಪಂಪರಾಮಾಯಣ' ಕೃತಿಯ ಬಗೆಗೆ, ತಾವು ಬೋಧಿಸಲಿರುವ ಪಠ್ಯಭಾಗಕ್ಕೆ ಸಂಬಂಧಿಸಿದಂತೆ ಅನಿಸಿಕೆಗಳನ್ನು ವ್ಯಕ್ತಪಡಿಸಿದರು.




# ಪತ್ರಿಕಾ ನೆನಪು




## ಹಳಗನ್ನಡ ತರಗತಿ

ಬೆಂಗಳೂರು: ಬಿಎಂಶ್ರೀ ಪ್ರತಿಷ್ಠಾನವು ಏ.13ರಿಂದ ಹಳಗನ್ನಡ ತರಗತಿಗಳನ್ನು ಆರಂಭಿಸಲಿದೆ. 'ನಾಗಚಂದ್ರನ ಪಂಪ ರಾಮಾಯಣ ಸಂಗ್ರಹದ ಸಮಗ್ರ ಅಧ್ಯಯನ' ಪಠ್ಯ ವಿಷಯವಾಗಿ ಆರು ತಿಂಗಳು ನಡೆಯಲಿರುವ ತರಗತಿಗಳಲ್ಲಿ ಕನ್ನಡ ವಿದ್ವಾಂಸರು ಬೋಧನೆ ಮಾಡಲಿದ್ದಾರೆ. ದೂರವಾಣಿ ಸಂಖ್ಯೆ 080-26615877 ಅಥವಾ ಇ-ಮೇಲ್ bmsritrust@gmail.com ಮೂಲಕ ಏ.10ರೊಳಗೆ ಹೆಸರು ನೋಂದಾಯಿಸಿಕೊಳ್ಳುವಂತೆ ಪ್ರಕಟಣೆ ತಿಳಿಸಿದೆ.

ಬಿಎಂಶ್ರೀ ಪ್ರತಿಷ್ಠಾನ ಆಯೋಜನೆ. 'ಅರ್ಚನ' ಕೃತಿ ಹಾಗೂ ಧ್ವನಿಮುದ್ರಿಕೆ ಲೋಕಾರ್ಪಣೆ. ಅಧ್ಯಕ್ಷತೆ: ಡಾ. ಬೈರಮಂಗಲ ರಾಮೇಗೌಡ. ಉಪಸ್ಥಿತಿ: ಡಾ.ಪಿ.ವಿ. ನಾರಾಯಣ, ಸಂಗೀತ ವಿದ್ವಾಂಸ ತಿರುಮಲೆ ಶ್ರೀನಿವಾಸ್. ಸ್ಥಳ: ಎಂವಿಸೀ ಸಭಾಂಗಣ, ಬಿಎಂಶ್ರೀ ಪ್ರತಿಷ್ಠಾನ, ನರಸಿಂಹರಾಜ ಕಾಲನಿ. ಸಂಜೆ 5ಕ್ಕೆ.

'ಅರ್ಚನ' ಕೃತಿ ಹಾಗೂ ತಿಮ್ಮಪ್ಪದಾಸರ ಕೀರ್ತನೆಗಳ ಧ್ವನಿಮುದ್ರಿಕೆ ಲೋಕಾರ್ಪಣೆ: ಕೃತಿ ಬಿಡುಗಡೆ-ಪಿ.ವಿ. ನಾರಾಯಣ, ಧ್ವನಿಮುದ್ರಿಕೆ ಬಿಡುಗಡೆ-ತಿರುಮಲೆ ಶ್ರೀನಿವಾಸ್ ಮತ್ತು ನಾಗರಾಜ ಹವಲ್ದಾರ್, ಅಧ್ಯಕ್ಷತೆ-ಬೈರಮಂಗಲ ರಾಮೇಗೌಡ, ಆಯೋಜನೆ-ಬಿ.ಎಂ.ಶ್ರೀ. ಪ್ರತಿಷ್ಠಾನ ಮತ್ತು ಸಮನ್ವಯ ಸಂಗೀತ ಕೇಂದ್ರ, ಸ್ಥಳ-ಎಂ.ವಿ.ಸೀ.ಸಭಾಂಗಣ, ಎನ್.ಆರ್.ಕಾಲೊನಿ, ಸಂಜೆ 5

**ಬಿ.ಎಂ.ಶ್ರೀ ಪ್ರತಿಷ್ಠಾನ:** 'ಅರ್ಚನ' ಕೃತಿ ಹಾಗೂ ದಿ. ತಿಮ್ಮಪ್ಪದಾಸರ ಆಯ್ದ ಕೀರ್ತನೆಗಳ ಧ್ವನಿಮುದ್ರಿಕೆ ಲೋಕಾರ್ಪಣೆ, ಕೃತಿ ಲೋಕಾರ್ಪಣೆ: ಸಾಹಿತಿ ಡಾ. ಪಿ.ವಿ.ನಾರಾಯಣ. ಧ್ವನಿಮುದ್ರಿಕೆ ಲೋಕಾರ್ಪಣೆ: ಸಂಗೀತ ವಿದ್ವಾಂಸರಾದ ತಿರುಮಲೆ ಶ್ರೀನಿವಾಸ್, ಡಾ. ನಾಗರಾಜ ಹವಾಲ್ದಾರ್. ಅಧ್ಯಕ್ಷತೆ: ಬಿ.ಎಂ.ಶ್ರೀ ಪ್ರತಿಷ್ಠಾನ ಅಧ್ಯಕ್ಷ ಡಾ. ಬೈರಮಂಗಲ ರಾಮೇಗೌಡ. ಸ್ಥಳ: ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ. ಪ್ರತಿಷ್ಠಾನ, 3ನೇ ಮುಖ್ಯ ರಸ್ತೆ, ಎನ್.ಆರ್.ಕಾಲೊನಿ. 5.00

**'ಹಳಗನ್ನಡ ಕಾವ್ಯ ಮತ್ತು ಶಾಸನ ಅಧ್ಯಯನ' ತರಗತಿಗಳ ಉದ್ಘಾಟನೆ:** ಪಿ.ವಿ.ನಾರಾಯಣ್, ಅಧ್ಯಕ್ಷತೆ-ಬೈರಮಂಗಲ ರಾಮೇಗೌಡ, ಆಯೋಜನೆ ಮತ್ತು ಸ್ಥಳ-ಬಿಎಂಶ್ರೀ ಪ್ರತಿಷ್ಠಾನ, ಬಿ.ರಾಮಸ್ವಾಮಿ ಸಭಾಂಗಣ, ಸಂಜೆ 5

**'ಕೊರಟಿ ಶ್ರೀನಿವಾಸರಾವ್ ಅವರ ಐತಿಹಾಸಿಕ ಸಣ್ಣ ಕಥೆಗಳು' ಉಪನ್ಯಾಸ:**ಎಲ್.ರಾಜೇಶ್, ಅಧ್ಯಕ್ಷತೆ-ಬೈರಮಂಗಲ ರಾಮೇಗೌಡ, ಆಯೋಜನೆ-ಬಿಎಂಶ್ರೀ ಪ್ರತಿಷ್ಠಾನ, ಸ್ಥಳ-ಎಂವಿಸೀ ಸಭಾಂಗಣ, ಬಿಎಂಶ್ರೀ ಕಲಾಭವನ, ಎನ್.ಆರ್.ಕಾಲೊನಿ, ಸಂಜೆ 4.30



ಬಿ.ಎಂ.ಶ್ರೀ. ಪ್ರತಿಷ್ಠಾನದ ವತಿಯಿಂದ ನಗರದಲ್ಲಿ ನಡೆದ 2022ನೇ ಸಾಲಿನ ಹಳಗನ್ನಡ ರಸಗ್ರಹಣ ತರಗತಿಯನ್ನು ಸಾಹಿತಿ ಪಿ.ವಿ.ನಾರಾಯಣ ಉದ್ಘಾಟಿಸಿ ಮಾತನಾಡಿದರು. ಚಂದ್ರಶೇಖರ್, ಕೆ.ಆರ್.ಗಣೇಶ್, ಆರ್. ಲಕ್ಷ್ಮೀನಾರಾಯಣ, ಬೈರಮಂಗಲ ರಾಮೇಗೌಡ, ಶಾಂತರಾಜು ಇದ್ದರು.



ಬಿಎಂಶ್ರೀ ಪ್ರತಿಷ್ಠಾನದಿಂದ ವಿಮರ್ಶಕಿ ಡಾ.ಬಿ.ಎನ್.ಸುಮಿತ್ರಾ ಬಾಯಿ ಅವರಿಗೆ 'ಪ್ರೊ.ಎಲ್.ಎಸ್.ಶೇಷಗಿರಿರಾವ್ ವಿಮರ್ಶಾ' ಪ್ರಶಸ್ತಿ ಪ್ರದಾನ ಮಾಡಲಾಯಿತು. (ಎಡದಿಂದ) ಪ್ರತಿಷ್ಠಾನದ ಅಧ್ಯಕ್ಷ ಬೈರಮಂಗಲ ರಾಮೇಗೌಡ, ಲೇಖಕ ಪಿ.ವಿ. ನಾರಾಯಣ, ಕಾರ್ಯಕಾರಿ ಸಮಿತಿ ಸದಸ್ಯರಾದ ಅಶ್ವತ್ಥನಾರಾಯಣ ಶಾಸ್ತ್ರಿ, ಪ್ರೊ ಜಿ.ಅಬ್ದುಲ್ ಬಷೀರ್ ಹಾಗೂ ಗೌರವ ಕಾರ್ಯದರ್ಶಿ ಶಾಂತರಾಜು ಇದ್ದಾರೆ.

## ಅರ್ಚನ ಪುಸ್ತಕ






**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2021-2023**
**dt. 28-12-2020**
**Office of Posting: Bangalore PSO, Bangalore 560026**
**Price : Annual Subscription Rs. 20/-**
**Date of publishing and Posting : 30-04-2022**

೧೭-೦೪-೨೦೨೨

## ಡಾ. ಬಿ.ಎನ್. ಸುಮಿತ್ರಾಬಾಯಿ ಅವರಿಗೆ ಪ್ರೊ. ಎಲ್.ಎಸ್. ಶೇಷಗಿರಿರಾವ್ ವಿಮರ್ಶಾ ಪ್ರಶಸ್ತಿ ಪ್ರದಾನ



ಬಿ.ಎಂ.ಶ್ರೀ. ಪ್ರತಿಷ್ಠಾನದ ಪ್ರೊ. ಎಲ್. ಎಸ್. ಶೇಷಗಿರಿರಾವ್ ದತ್ತಿಯ ವಿಮರ್ಶಾ ಪ್ರಶಸ್ತಿಯನ್ನು ಕನ್ನಡದ ಹಿರಿಯ ಸಾಹಿತಿ ಮತ್ತು ವಿಮರ್ಶಕಿ ಡಾ.ಬಿ.ಎನ್. ಸುಮಿತ್ರಾಬಾಯಿ ಅವರಿಗೆ ಮಲ್ಲೇಶ್ವರದ ಅವರ ನಿವಾಸದಲ್ಲೇ ಪ್ರದಾನ ಮಾಡಲಾಯಿತು.

ಚಿತ್ರದಲ್ಲಿ ಎಡದಿಂದ ಬಲಕ್ಕೆ ಡಾ. ಬೈರಮಂಗಲ ರಾಮೇಗೌಡ, ಡಾ.ಪಿ.ವಿ.ನಾರಾಯಣ, ಅಶ್ವತ್ಥನಾರಾಯಣ ಶಾಸ್ತ್ರೀ ಡಾ. ಶಾಂತರಾಜು ಮತ್ತು ಪ್ರೊ. ಜಿ.ಅಬ್ದುಲ್ ಬಷೀರ್ ಇದ್ದಾರೆ.

ಈ ಪ್ರಶಸ್ತಿ ಪ್ರದಾನ ಕಾರ್ಯಕ್ರಮವು ೧೭-೦೪-೨೦೨೨ರಂದು ನಡೆಯಿತು.

**Printed and published by** : B.R.Ravindranath on behalf of the BMSRI SMARAKA PRATISHTANA, B.M.Sri Pratishtana Road, (3rd Main Road) NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10 . and published at BMSRI PRATISHTANA, B.M.Sri Pratishtana Road, 3rd Main Road, NR Colony, Bangalore - 560019 Editor : **B.R.Ravindranath**

**ಅಚ್ಚಾದ ಪುಸ್ತಕ**

ಶ್ರೀಮತಿ/ಶ್ರೀ.......................................................................................

..........................................................................................................

..........................................................................................................

ವಿಳಾಸ
**ಬಿ.ಎಂ.ಶ್ರೀ. ಪ್ರತಿಷ್ಠಾನ**
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭